# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 248(284) |
| ಸದಸ್ಯರ ಹೆಸರು | ಡಾ: ಜೈ ಮಾಲ ರಾಮಚಂದ್ರ(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | 04.03.2020 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರದ ಅಧೀನದಲ್ಲಿರುವ ಬಂದರುಗಳ ಸಂಖ್ಯೆ ಎಷ್ಟು: | ರಾಜ್ಯ ಸರ್ಕಾರದ ಅಧೀನದಲ್ಲಿ 12 ಕಿರು ಬಂದರುಗಳಿವೆ. 1)ಕಾರವಾರ 2)ಬೇಲೇಕೇರಿ 3)ತದಡಿ 4)ಪಾವಿನಕುರ್ವೆ 5)ಹೊನ್ನಾವರ 6)ಮಂಕಿ 7)ಭಟ್ಕಳ 8)ಕುಂದಾಪುರ 9)ಹಂಗಾರಕಟ್ಟಾ 10)ಮಲ್ಪೆ 11)ಪಡುಬಿದ್ರಿ 12)ಹಳೇ ಮಂಗಳೂರು ಬಂದರು. |
| ಆ) | ಮಂಗಳೂರಿನ ಪಣಂಬೂರು ಯೋಜನೆಯು ಯಾವ ವರ್ಷದಲ್ಲಿ ಪ್ರಾರಂಭಗೊಂಡಿತ್ತು: | ನವಮಂಗಳೂರು ಬಂದರು ಕೇಂದ್ರ ಸರ್ಕಾರದ ನೌಕಾಯಾನ ಮಂತ್ರಾಲಯದ ಅಧೀನದಲ್ಲಿ ಬರುತ್ತದೆ. |
| ಇ) | ಕಳೆದ 3 ವರ್ಷಗಳಿಂದ ರಾಜ್ಯ ಸರ್ಕಾರಕ್ಕೆ ಈ ಬಂದರುಗಳಿಂದ ಬಂದಿರುವ ಆದಾಯ ಎಷ್ಟು: (ಸಂಪೂರ್ಣ ವಿವರ ನೀಡುವುದು). | ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ 12 ಕಿರು ಬಂದರುಗಳಲ್ಲಿ ಕಳೆದ 3 ವರ್ಷಗಳಲ್ಲಿ ಗಳಿಸಿದ ಆದಾಯದ ವಿವರಗಳು ಈ ಕೆಳಗಿನಂತಿವೆ. |

| ಕ್ರ.ಸಂ. | ವರ್ಷ | ಆದಾಯ (ರೂ. ಲಕ್ಷಗಳಲ್ಲಿ) |
|---|---|---|
| 1. | 2016-17 | 1526.25 |
| 2. | 2017-18 | 1717.42 |
| 3. | 2018-19 | 2229.69 |

| | | |
|---|---|---|
| ಈ) | ಪ್ರಸ್ತುತ ಇರುವ ಬಂದರುಗಳನ್ನು ಉನ್ನತೀಕರಿಸಿ ರಾಜ್ಯಕ್ಕೆ ಪ್ರಮುಖ್ಯವಾಗಿ ಮಂಗಳೂರು ಬಂದರನ್ನು ಪೂರ್ಣ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುವಲ್ಲಿ ಸರ್ಕಾರವು ಹಮ್ಮಿಕೊಂಡಿರುವ ಯೋಜನೆಗಳಾವುವು? | ಕರ್ನಾಟಕ ರಾಜ್ಯದ ಕಿರು ಬಂದರುಗಳ ಪೈಕಿ ಒಂದಾದ ಹಳೇ ಮಂಗಳೂರು ಬಂದರಿನಲ್ಲಿ ಭದ್ರತಾ ಸಿವಿಲ್ ಕಾಮಗಾರಿಗಳು, ಹೂಳೆತ್ತುವ ಕಾಮಗಾರಿಗಳು ಹಾಗೂ ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿರುತ್ತದೆ. ಇದರ ಜೊತೆ ಈ ಬಂದರಿನ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರದ ಸಾಗರಮಾಲ ಯೋಜನೆಯಡಿ ಈ ಕೆಳಗಿನ 2 ಕಾಮಗಾರಿಗಳು ಮಂಜೂರಾಗಿರುತ್ತವೆ.<br>1. 350 ಮೀಟರ್ ಉದ್ದದ ಕೋಸ್ಟಲ್ ಬರ್ತ್ ನಿರ್ಮಾಣ ಕಾಮಗಾರಿ, ಅಂದಾಜು ಮೊತ್ತ ರೂ.6500 ಲಕ್ಷ<br>ಈ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿದ್ದು, ಪ್ರಸ್ತುತ ತಾಂತ್ರಿಕ ಬಿಡ್ಡನ್ನು ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರಿಗೆ ದಿನಾಂಕ:27.02.2020 ರಂದು ಅಧೀಕ್ಷಕ ಇಂಜಿನೀಯರ್ ಇವರು ಸಲ್ಲಿಸಿರುತ್ತಾರೆ. ಈ ಕಾಮಗಾರಿಗೆ ಸಿಆರ್‌ಝೆಡ್ ಅನುಮತಿಯು ದಿನಾಂಕ:30.11.2019 ರಂದು ಪ್ರಾಪ್ತವಾಗಿದ್ದು, ಪರಿಸರ ಇಲಾಖೆಯ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿಯ ನಿರಾಕ್ಷೇಪಣಾ ಪತ್ರ ಪಡೆಯುವ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. ಪರಿಸರ ಇಲಾಖೆಯ ಸಮಿತಿಯ (SEIAA) ಸಭೆಯು ದಿನಾಂಕ:03.01.2020 ರಂದು ಜರುಗಿದ್ದು, ಸಭೆಯ ನಡವಳಿಯನ್ನು ನಿರೀಕ್ಷಿಸಲಾಗಿದೆ. ಮುಂದುವರಿದು, ಮಾಲಿನ್ಯ ನಿಯಂತ್ರಣ ಮಂಡಳಿಯ ನಿರಾಕ್ಷೇಪಣಾ ಪತ್ರ ಪಡೆಯುವ ಪ್ರಕ್ರಿಯೆಯು ಪ್ರಗತಿಯಲ್ಲಿದೆ.<br><br>2. ಬೆಂಗ್ರೆ ಬದಿಯಲ್ಲಿ ಕ್ಯಾಪಿಟಲ್ ಡ್ರೆಜಿಂಗ್ ಕಾಮಗಾರಿ ಅಂದಾಜು ಮೊತ್ತ ರೂ.2900 ಲಕ್ಷ<br>ಈ ಕಾಮಗಾರಿಯ ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿದ್ದು, ಪ್ರಸ್ತುತ ತಾಂತ್ರಿಕ ಬಿಡ್ಡನ್ನು ಮುಖ್ಯ ಇಂಜಿನೀಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ), ಧಾರವಾಡ ಇವರಿಗೆ ದಿನಾಂಕ:27.02.2020 ರಂದು ಅಧೀಕ್ಷಕ ಇಂಜಿನೀಯರ್ ಇವರು ಸಲ್ಲಿಸಿರುತ್ತಾರೆ. ಈ ಕಾಮಗಾರಿಗೆ ಸಿಆರ್‌ಝೆಡ್ ಅನುಮತಿಯು ದಿನಾಂಕ:30.11.2019 ರಂದು ಪ್ರಾಪ್ತವಾಗಿದ್ದು, ಪರಿಸರ ಇಲಾಖೆಯ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿಯ ನಿರಾಕ್ಷೇಪಣಾ ಪತ್ರ ಪಡೆಯುವ ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. ಪರಿಸರ ಇಲಾಖೆಯ ಸಮಿತಿಯ (SEIAA) ಸಭೆಯು ದಿನಾಂಕ:03.01.2020 ರಂದು ಜರುಗಿದ್ದು, ಸಭೆಯ ನಡವಳಿಯನ್ನು ನಿರೀಕ್ಷಿಸಲಾಗಿದೆ. ಮುಂದುವರಿದು, ಮಾಲಿನ್ಯ ನಿಯಂತ್ರಣ ಮಂಡಳಿಯ ನಿರಾಕ್ಷೇಪಣಾ ಪತ್ರ ಪಡೆಯುವ ಪ್ರಕ್ರಿಯೆಯು ಪ್ರಗತಿಯಲ್ಲಿದೆ. |

(ಲೋಇ 28 ಪಿಎಸ್‌ಪಿ 2020)

(ಕೋಟ ಶ್ರೀನಿವಾಸ ಪೂಜಾರಿ)
ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು